ತರಗತಿಕೋಣೆಯಿಂದ ಹೊರಗುಳಿಯುವುದಕ್ಕೆ ಶಿಕ್ಷಕರ ‘ಕರ್ತವ್ಯ ಲೋಪ’ವೇ ಮುಖ್ಯ ಕಾರಣವಲ್ಲ. ಶಿಕ್ಷಣ ವ್ಯವಸ್ಥೆಯು ಅವರ ಮೇಲೆ ಹೊರಿಸುವ ಅನೇಕ ಶಿಕ್ಷಣೇತರ ಜವಾಬ್ದಾರಿಗಳೂ ಇವೆ. ಶಿಕ್ಷಕರ ದಿನನಿತ್ಯದ ವಾಸ್ತವಗಳನ್ನು ನಿರ್ಲಕ್ಷಿಸಿ, ಅಸುರಕ್ಷಿತ ವಾತಾವರಣವನ್ನು ನಿರ್ಮಿಸುವ ಅರ್ಥಹೀನ ‘ಉತ್ತರದಾಯಿತ್ವದ’ ಕ್ರಮಗಳನ್ನು ಕೂಡಲೇ ಕೈಬಿಡಬೇಕು.

# ಸರ್ಕಾರಿ ಶಾಲಾ ಶಿಕ್ಷಕರ ಗೈರುಹಾಜರಾತಿಯ ಸತ್ಯಾಸತ್ಯತೆ

## ಪ್ರಚಲಿತ ನಿರೂಪಣೆಗಳು ಬಿಂಬಿಸುತ್ತಿರುವ ಅರೆಸತ್ಯಗಳು

ಇತ್ತೀಚಿನ ವರ್ಷಗಳಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಕರ ಗೈರುಹಾಜರಾತಿಯ ಪ್ರಮಾಣವು ಉಲ್ಬಣಿಸುತ್ತಿರುವ ಕುರಿತು ವಿಸ್ತೃತ ಮಟ್ಟದ ಚರ್ಚೆಗಳಾಗುತ್ತಿವೆ. ಅವು ಶಿಕ್ಷಣಾಸಕ್ತರ, ಅದರಲ್ಲೂ ಮುಖ್ಯವಾಗಿ ನೀತಿ ನಿರೂಪಕರ ಮತ್ತು ಸಂಶೋಧಕರ ಗಮನವನ್ನು ಸೆಳೆದಿವೆ.

ಈ ವಿಷಯದ ಬಗೆಗಿನ ಬಹುತೇಕ ಎಲ್ಲ ಪ್ರಚಲಿತ ನಿರೂಪಣೆಗಳೂ ಸರ್ಕಾರಿ ಶಾಲಾ ವ್ಯವಸ್ಥೆಯ ದೌರ್ಬಲ್ಯಗಳಿಗೆ ಶಿಕ್ಷಕರ ಗೈರುಹಾಜರಾತಿಯೇ ಮೂಲ ಕಾರಣವೆಂಬ ವಾದವನ್ನು ಮುಂದಿರಿಸಿ ಶಿಕ್ಷಕರ ಮೇಲೆ ಗೂಬೆ ಕೂರಿಸುವ ಯತ್ನಗಳನ್ನು ಮಾಡುತ್ತಿವೆ. ಅಲ್ಲದೆ ಈ ಜ್ವಲಂತ ಸಮಸ್ಯೆಗೆ ಪರಿಹಾರೋಪಾಯವಾಗಿ ಶಿಕ್ಷಕರನ್ನು ನಿಯಂತ್ರಣಕ್ಕೊಳಪಡಿಸಬೇಕೆಂಬ ಆಲೋಚನೆಗಳು ಆಡಳಿತಾತ್ಮಕ ವಲಯಗಳಲ್ಲಿ ಗರಿಗೆದರುತ್ತಿರುವುದು ಕಳವಳಕಾರಿ ಬೆಳವಣಿಗೆಯಾಗಿದೆ. ಕೇಂದ್ರ ಸರ್ಕಾರದ 2016–17ರ ಆರ್ಥಿಕ ಸಮೀಕ್ಷೆಯಲ್ಲಿ ಶಿಕ್ಷಕರ ಗೈರುಹಾಜರಾತಿಯ ಮೇಲೆ ಕಡಿವಾಣ ಹಾಕಲು ಬಯೋಮೆಟ್ರಿಕ್ ವ್ಯವಸ್ಥೆಯನ್ನು ಅಳವಡಿಸಬೇಕೆಂದು ಮಾಡಿರುವ ಪ್ರಸ್ತಾವನೆಯು ಈ ವಾದಕ್ಕೆ ಪುಷ್ಟಿ ನೀಡುತ್ತದೆ.

## ಹೊಸ ಅಧ್ಯಯನ ಹೇಳುವುದೇನು?

ನಮ್ಮ ಸಂಸ್ಥೆಯು ಸುಮಾರು ಎರಡು ದಶಕಗಳಿಂದಲೂ ಸರ್ಕಾರಿ ಶಾಲಾ ಶಿಕ್ಷಣವ್ಯವಸ್ಥೆಯೊಂದಿಗೆ ತಳಹಂತದಲ್ಲಿ ತೊಡಗಿಸಿಕೊಂಡಿದೆ. ಶಿಕ್ಷಕರ ಗೈರುಹಾಜರಾತಿಯನ್ನು ಸೂಕ್ಷ್ಮವಾಗಿ ಅರಿಯುವ ಮತ್ತು ಈ ಬಗೆಗಿನ ವಾಸ್ತವ ಸ್ಥಿತಿಯ ಮೇಲೆ ಬೆಳಕು ಚೆಲ್ಲುವ ಉದ್ದೇಶದಿಂದ ನಮ್ಮ ಸಂಸ್ಥೆಯು ಭಾರತದ ಐದು ರಾಜ್ಯಗಳಲ್ಲಿ ಅಂದರೆ ಕರ್ನಾಟಕ, ಛತ್ತೀಸ್‌ಗಢ, ಮಧ್ಯಪ್ರದೇಶ, ರಾಜಸ್ತಾನ ಮತ್ತು ಉತ್ತರಾಖಂಡಗಳಲ್ಲಿ ಕಾರ್ಯೋನ್ಮುಖವಾಗಿದೆ. ಅತಿ ಹಿಂದುಳಿದ ಭಾಗಗಳಿಗೆ ಸೇರಿದ 619 ಗ್ರಾಮೀಣ ಶಾಲೆಗಳ 2861 ಶಿಕ್ಷಕರನ್ನೊಳಗೊಳ್ಳುವ ಹಾಗೆ ವಿಸ್ತೃತ ಸಂಶೋಧನೆಯೊಂದನ್ನು ಮಾರ್ಚ್ 2017ರಲ್ಲಿ ಕೈಗೊಂಡಿತ್ತು.

## ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಪ್ರಶ್ನೆಗಳು

(1) ಸರ್ಕಾರಿ ಶಾಲೆಗಳಲ್ಲಿನ ಶಿಕ್ಷಕರ ಗೈರುಹಾಜರಾತಿಗೆ ಇರುವ ಮುಖ್ಯ ಕಾರಣಗಳೇನು?

(2) ಶಿಕ್ಷಕರ ಗೈರುಹಾಜರಾತಿಯ ಪ್ರಮಾಣವೆಷ್ಟು?

## ಸಂಶೋಧನೆಯಿಂದ ಹೊರಹೊಮ್ಮಿದ ಮುಖ್ಯಾಂಶಗಳು:

ಪ್ರಚಲಿತ ನಿರೂಪಣೆಗಳು ಬಿಂಬಿಸಿರುವ ಅಂಶಗಳಿಗಿಂತ ವ್ಯತಿರಿಕ್ತವಾದ ವಾಸ್ತವಾಂಶಗಳನ್ನು ಈ ಸಂಶೋಧನಾ ವರದಿಯು ಹೊರಹಾಕಿದೆ.

(ಅ) ಶಿಕ್ಷಕರ ಗೈರುಹಾಜರಾತಿಯ ಒಟ್ಟಾರೆ ಪ್ರಮಾಣ ಶೇ. 18.9ರಷ್ಟಿದ್ದು ಅದರಲ್ಲಿ 'ಕಾರಣರಹಿತ ಗೈರುಹಾಜರಾತಿ'ಯ ಪ್ರಮಾಣ ಕೇವಲ ಶೇ.2.5ರಷ್ಟಿದೆ.

(ಆ) ತರಗತಿಗಳಲ್ಲಿ ಶಿಕ್ಷಕರ ಅನುಪಸ್ಥಿತಿಗೆ ಇರುವ ಇನ್ನಿತರ ಪ್ರಮುಖ ಕಾರಣಗಳು ಮತ್ತು ಅವುಗಳಿಗೆ ಸಂಬಂಧಿಸಿದ ಶೇಕಡಾವಾರು ಪ್ರಮಾಣ ಹೀಗಿವೆ:

| **ಶೇ. 9.1** | **ಶೇ.3.8** |
|---|---|
| ಶಿಕ್ಷಕರು ಪಡೆಯುವ ನ್ಯಾಯಯುತ (ಸಾಂದರ್ಭಿಕ, ವೈದ್ಯಕೀಯ) ರಜೆಗಳು | ಅಧಿಕೃತ ಶೈಕ್ಷಣಿಕ ಕರ್ತವ್ಯಗಳು (ತಾತ್ಕಾಲಿಕವಾಗಿ ಬೇರೆ ಶಾಲೆಗೆ ನಿಯೋಜಿಸಲ್ಪಡುವುದು, ತರಬೇತಿಗಳು ಮತ್ತು ಸಮೂಹ ಸಮಾಲೋಚನಾ ಸಭೆಗಳಲ್ಲಿ ಭಾಗವಹಿಸುವುದು, ಇತ್ಯಾದಿ) |

| **ಶೇ.2.1**<br>ಇತರ ಅಧಿಕೃತ ಆಡಳಿತಾತ್ಮಕ ಕರ್ತವ್ಯಗಳು (ಬಿಸಿಯೂಟ, ವಿಶೇಷ ಅಗತ್ಯಗಳನ್ನುಳ್ಳ ಮಕ್ಕಳ ಕುರಿತಾದ ಮಾಹಿತಿ ಸಂಗ್ರಹ, ಇಲಾಖೆಯ ಹಲವು ಯೋಜನೆಗಳ ಅನುಷ್ಠಾನ ಮುಂತಾದವು) | **ಶೇ.2.5**<br>ಶಿಕ್ಷಕರ 'ಕಾರಣರಹಿತ ಗೈರುಹಾಜರಾತಿ' ಪ್ರಮಾಣ | **ಶೇ.0.9**<br>ಇಲಾಖೆಯ ಇತರ ಅಧಿಕೃತ ಕರ್ತವ್ಯಗಳು (ಚುನಾವಣೆ ಕರ್ತವ್ಯ, ಆರೋಗ್ಯ ಮತ್ತು ಇತರ ಇಲಾಖೆಗಳ ಕರ್ತವ್ಯಗಳು, ಪಂಚಾಯಿತಿ ಸಭೆಗಳು, ಇತ್ಯಾದಿ) |
|---|---|---|

(ಇ) ಇದರಿಂದ ಸ್ಪಷ್ಟವಾಗಿ ನಮಗೆ ತಿಳಿದು ಬರುವ ಒಳನೋಟವೇನೆಂದರೆ, ತರಗತಿಕೋಣೆಯಿಂದ ಹೊರಗುಳಿಯುವುದಕ್ಕೆ ಶಿಕ್ಷಕರ 'ಕರ್ತವ್ಯ ಲೋಪ'ವೇ ಮುಖ್ಯ ಕಾರಣವಲ್ಲ. ಶಿಕ್ಷಣ ವ್ಯವಸ್ಥೆಯು ಅವರ ಮೇಲೆ ಹೊರಿಸುವ ಅನೇಕ ಶಿಕ್ಷಣೇತರ ಜವಾಬ್ದಾರಿಗಳೂ ಇವೆ.

(ಈ) ಆಗಿಂದಾಗ್ಗೆ ಶಿಕ್ಷಕರು ನ್ಯಾಯಯುತ ಕಾರಣಗಳಿಗಾಗಿ ತರಗತಿಗಳ ಪಾಠ–ಪ್ರವಚನಗಳಿಂದ ದೂರವುಳಿಯುವ ಅನಿವಾರ್ಯತೆಯಿದೆ. ಶಿಕ್ಷಕರು ವಿನಾಕಾರಣ ಗೈರುಹಾಜರಾಗುತ್ತಿದ್ದಾರೆಂಬ ಸಿದ್ಧ ಪಡಿಯಚ್ಚಿನ ಚಿತ್ರವನ್ನು ಮೂಡಿಸಿ, ವಿಸ್ತೃತವಾಗಿ ಅದನ್ನೇ ಸತ್ಯವೆಂದು ಬಿಂಬಿಸುತ್ತಿರುವುದು ಶಿಕ್ಷಕರನ್ನು ಅವಮಾನಿಸಿದಂತೆಯೇ ಸರಿ.

(ಉ) ಈ ಚಿತ್ರಣಕ್ಕೆ ತೀರ ವಿಭಿನ್ನವಾಗಿ, ಎಷ್ಟೋ ಬಾರಿ ಶಿಕ್ಷಕರು ಪ್ರತಿಕೂಲ ಸವಾಲುಗಳ ನಡುವೆಯೂ ಬದ್ಧತೆಯಿಂದ ತಮ್ಮ ಕೆಲಸ ನಿರ್ವಹಿಸುತ್ತಿದ್ದಾರೆ. ಸಾಮಾಜಿಕವಾಗಿ ಅವಕಾಶವಂಚಿತ, ಪ್ರತ್ಯೇಕಿಸಲ್ಪಟ್ಟ ಸಮುದಾಯಗಳ ಮಕ್ಕಳ ಅಗತ್ಯಗಳು ಮತ್ತು ಸಾಂದರ್ಭಿಕ ಹಿನ್ನೆಲೆಗಳನ್ನರಿತು ಅವರ ಏಳ್ಗೆಗೆ ಸಂವೇದನಾಶೀಲತೆಯಿಂದ ಸ್ಪಂದಿಸುತ್ತಿದ್ದಾರೆ. ಶಾಲೆಗಳಲ್ಲಿ ಮಗುಸ್ನೇಹಿ ವಾತಾವರಣವನ್ನು ನಿರ್ಮಿಸಿ, ತಮ್ಮ ವಿದ್ಯಾರ್ಥಿಗಳನ್ನು ಸಮಾಜದಲ್ಲಿ ಅಪೇಕ್ಷಿತ ಮನುಷ್ಯರನ್ನಾಗಿ ರೂಪಿಸಬೇಕೆಂಬ ಸ್ಪಷ್ಟ ಶೈಕ್ಷಣಿಕ ಪರಿಕಲ್ಪನೆಯನ್ನು ಹೊಂದಿದ್ದಾರೆ.

## ಗುಣಾತ್ಮಕ ಅಂಶಗಳ ಮಹತ್ವ

ಸಂಶೋಧನೆಯ ಉದ್ದೇಶವು ಕೇವಲ ಸಂಖ್ಯಾಶಾಸ್ತ್ರದ ಆಯಾಮದ ಮೇಲಷ್ಟೇ ಅಧ್ಯಯನವನ್ನು ಕೇಂದ್ರೀಕರಿಸುವುದಾಗಿರಲಿಲ್ಲ. ಜನಾಂಗಶಾಸ್ತ್ರೀಯ (ಎಥ್ನೋಗ್ರಫಿ) ವಿಧಾನವನ್ನು ಬಳಸಿ ಆಯ್ದ ಕೆಲವು ಶಿಕ್ಷಕರ ಕುರಿತಾದ

ಅಧ್ಯಯನವನ್ನು ಗುಣಾತ್ಮಕ ನೆಲೆಯಲ್ಲಿ ಕೈಗೊಳ್ಳಲಾಯಿತು, ಶಾಲಾ ಅವಧಿಯಲ್ಲಿ ಶಿಕ್ಷಕರು ತಮ್ಮ ಹಾಜರಾತಿಯನ್ನು ಹೇಗೆ ನಿರ್ವಹಿಸುತ್ತಾರೆ? ಅವರು ಬೋಧನೆಯಲ್ಲಿ ತೊಡಗಿಕೊಳ್ಳದ ಸಮಯದಲ್ಲೂ ಶೈಕ್ಷಣಿಕ ಗುಣಮಟ್ಟವನ್ನು ಹೇಗೆ ಕಾಯ್ದಿರಿಸಿಕೊಳ್ಳುತ್ತಾರೆ? ದೈನಂದಿನ ಸವಾಲುಗಳನ್ನು ಅವರು ಹೇಗೆ ಎದುರಿಸುತ್ತಾರೆ? ಎಂಬ ಈ ಅಂಶಗಳ ಬಗ್ಗೆಯೂ ಪ್ರತ್ಯಕ್ಷವಾಗಿ ನೋಡಿ ತಿಳಿಯುವುದು ಆ ಸಂಶೋಧನೆಯ ಉದ್ದೇಶವಾಗಿತ್ತು. ಪ್ರಚಲಿತ ಚರ್ಚೆಗಳು ಸಂಪೂರ್ಣವಾಗಿ ನಿರ್ಲಕ್ಷಿಸಿರುವ, ಆದರೆ ಶಿಕ್ಷಕರ ವೃತ್ತಿ ನಿರ್ವಹಣೆಗೆ ಪ್ರೇರಕ ಶಕ್ತಿಯಾಗಿರುವ 'ಸ್ವಾಯತ್ತತೆ'ಯನ್ನು ನಮ್ಮ ಸಂಶೋಧಕರು ಗುರುತಿಸಿದರು. ಇದರಿಂದ, ಶಿಕ್ಷಕರೊಂದಿಗೆ ನಡೆಸಿದ ಪ್ರಕರಣ ಅಧ್ಯಯನ(ಕೇಸ್ ಸ್ಟಡೀಸ್)ಗಳಲ್ಲಿ ಅಗತ್ಯವಾಗಿದ್ದ ಪೂರಕ ವಾತಾವರಣವು ಸೃಷ್ಟಿಯಾಯಿತು.

**ಅಂತಿಮ ಮಾತು:**

ಲಕ್ಷಾಂತರ ಶಿಕ್ಷಕರು, ತಮ್ಮ ಅನೇಕ ವೈಯಕ್ತಿಕ ಅನನುಕೂಲತೆಗಳು, ಸಾಂದರ್ಭಿಕ ಸವಾಲುಗಳು, ವ್ಯವಸ್ಥೆಯ ಕಾರಣದಿಂದುಂಟಾಗುವ ಸಂಕಷ್ಟಗಳ ನಡುವೆಯೂ ವೃತ್ತಿ ಪ್ರೀತಿ ಮತ್ತು ಬದ್ಧತೆಯಿಂದ ತೊಡಗಿಸಿಕೊಂಡಿರುತ್ತಾರೆ. ಅವರ ದಿನನಿತ್ಯದ ವಾಸ್ತವಗಳನ್ನು ನಿರ್ಲಕ್ಷಿಸಿ, ಅಸುರಕ್ಷಿತ ವಾತಾವರಣವನ್ನು ನಿರ್ಮಿಸುವ ಅರ್ಥಹೀನ 'ಉತ್ತರದಾಯಿತ್ವದ' ಕ್ರಮಗಳನ್ನು ಕೂಡಲೇ ಕೈಬಿಡಬೇಕು. ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸುವ ಮತ್ತು ದೂರಗಾಮಿ ಕ್ರಮಗಳನ್ನು ಕೈಗೊಳ್ಳುವ ನಿಟ್ಟಿನಲ್ಲಿ ನೀತಿನಿರೂಪಕರು ಮತ್ತು ಶಿಕ್ಷಣ ಇಲಾಖೆ ಮುಂದಾಗಬೇಕಾಗಿದೆ.

ಸೇವಾಪೂರ್ವ ಶಿಕ್ಷಕರ ತರಬೇತಿಯನ್ನು ಬಲಪಡಿಸುವುದು. ಕಡಿಮೆ ಶಿಕ್ಷಕರಿರುವ ಶಾಲೆಗಳಿಗೆ ಆದ್ಯತೆಯ ಮೇಲೆ ಶಿಕ್ಷಕರನ್ನು ನಿಯೋಜಿಸುವುದು, ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲವನ್ನೊದಗಿಸಲು ಇರುವ ಸಾಂಸ್ಥಿಕ ವ್ಯವಸ್ಥೆಗಳನ್ನು ಗಟ್ಟಿಗೊಳಿಸುವುದು, ಶೈಕ್ಷಣಿಕವಲ್ಲದ ಹೊರೆಯನ್ನು ಕಡಿಮೆ ಮಾಡುವುದು, ಶಿಕ್ಷಕರು ಮಾಡುವ ಒಳ್ಳೆಯ ಕೆಲಸಗಳಿಗೆ ಪ್ರೋತ್ಸಾಹಿಸಿ, ಅವರ ವೃತ್ತಿ ಬೆಳವಣಿಗೆಗೆ ವಿಪುಲ ಅವಕಾಶಗಳನ್ನೊದಗಿಸುವುದು – ಇವು ಶೈಕ್ಷಣಿಕ ಸುಧಾರಣೆಗೆ ಆದ್ಯತೆಯ ಮೇಲೆ ಗಮನ ನೀಡಬೇಕಾದ ಅಂಶಗಳು.

■

ಪ್ರಜಾವಾಣಿ, 23–10–2017